ಡಾ॥ ಎಸ್. ರಾಜಶೇಖರ

# ಹಂಪೆಯ ವಿರೂಪಾಕ್ಷ ದೇವಾಲಯ ಸಮೂಹ : ಕಾಲಾನುಕ್ರಮದ ಅಧ್ಯಯನ

---

ಸುಮಾರು ೭ನೇ ಶತಮಾನದಿಂದ ಇಂದಿನವರೆಗಿನ ಹಂಪೆಯ ಚರಿತ್ರೆಯನ್ನು ಎತ್ತಿಹಿಡಿಯುವಲ್ಲಿ ಹಂಪೆಯ ವಿರೂಪಾಕ್ಷ ದೇವಾಲಯವೂ ಒಂದು ಪ್ರಮುಖ ರಚನೆಯಾಗಿದೆ. ವಿಠ್ಠಲ, ಹಜಾರರಾಮ ಮತ್ತು ಅಚ್ಯುತರಾಯ ದೇವಾಲಯಗಳು ವಾಸ್ತುಶಿಲ್ಪದ ದೃಷ್ಟಿಯಿಂದ ಪ್ರಸಿದ್ಧವಾಗಿದ್ದರೂ ಈಗ ಅವು ಹಾಳಾಗಿವೆ. ವಿರೂಪಾಕ್ಷ ದೇವಾಲಯ ಸಮೂಹವು ಮೊದಲಿಗೆ ಒಂದು ಸಣ್ಣ ದೇವಾಲಯವಾಗಿದ್ದು, ಕಾಲಕ್ರಮೇಣ ಪುನರ್ನಿರ್ಮಾಣ, ಬದಲಾವಣೆ, ಜೀರ್ಣೋದ್ಧಾರ ಮತ್ತು ಹೊಸ ಭಾಗಗಳ ಸೇರ್ಪಡೆಯಿಂದಾಗಿ, ಒಂದು ದೊಡ್ಡ ಸಮೂಹವಾಗಿ ಸೃಷ್ಟಿಗೊಂಡಿತು. ವಿರೂಪಾಕ್ಷ ದೇವಾಲಯ ಮತ್ತು ಆದರ ಸಮೂಹದ ಸುತ್ತಮುತ್ತಲಿನ ಪ್ರದೇಶವು ಒಂದು ಸಾಮಾಜಿಕ ಕೇಂದ್ರವಾಯಿತಲ್ಲದೆ, ಶಾಸನಗಳಲ್ಲಿ ಹಂಪೆಯನ್ನು ವಿಜಯವಿರೂಪಾಕ್ಷಪುರ ಎಂದೇ ಕರೆಯಲಾಯಿತು.

ಸಂಗಮ ಸಹೋದರರಿಂದ ವಿಜಯನಗರ ಸಾಮ್ರಾಜ್ಯವು ಪ್ರಾರಂಭವಾದಾಗ, ವಿರೂಪಾಕ್ಷ ದೇವಾಲಯವು ಅದರ ರಾಜಕೀಯ ಶಕ್ತಿಯ ಪ್ರಧಾನ ಕೇಂದ್ರವಾಯಿತು. ಅವರು ಶೈವರಾಗಿದ್ದುದರಿಂದ, ವಿರೂಪಾಕ್ಷ ದೇವರನ್ನು ತಮ್ಮ ಮನೆತನದ ದೇವತೆಯೆಂದು ಪರಿಗಣಿಸಿ, ತಮ್ಮ 'ಒಪ್ಪ'ವನ್ನು ಹಾಕುವಾಗ 'ಶ್ರೀ ವಿರೂಪಾಕ್ಷ'ನೆಂಬ ಹೆಸರನ್ನೇ ಅನುಸರಿಸಿದರು. ವಿಠ್ಠಲ ದೇವಾಲಯವು ವಾಸ್ತುಶಿಲ್ಪ ದೃಷ್ಟಿಯಿಂದ ಒಂದು ಅತ್ಯುತ್ಕೃಷ್ಟ ರಚನಾಕೃತಿ ಎನಿಸಿದರೂ ಸಾಳುವ ಮತ್ತು ತುಳುವರ ಕಾಲದಲ್ಲೂ ಜನಸಮುದಾಯದಲ್ಲಿ ಈ ದೇವಾಲಯದ ಬಗ್ಗೆ ಪವಿತ್ರ ಭಾವನೆ ಮುಂದುವರಿದಿತ್ತು. ಕ್ರಿ.ಶ. ೧೫೬೫ರ ಯುದ್ಧಾನಂತರ ರಾಜಧಾನಿಯು ವಿನಾಶಗೊಳಿಸಲ್ಪಟ್ಟಾಗ, ವಿರೂಪಾಕ್ಷ ದೇವಾಲಯವು ಇತರ ಶೈವ ದೇವಾಲಯಗಳೊಂದಿಗೆ ಉಳಿದುಕೊಂಡು ಬಂದು, ಬಹುಸಂಖ್ಯೆಯಲ್ಲಿ ಭಕ್ತರನ್ನು ಆಕರ್ಷಿಸಿತು.

ಮೊದಲೇ ಹೇಳಿರುವಂತೆ, ವಿರೂಪಾಕ್ಷ ದೇವಾಲಯ ಸಮೂಹವು ಅನೇಕ ಶತಮಾನಗಳಲ್ಲಿ ಹೊಸ ಹೊಸ ಭಾಗಗಳ ಸೇರ್ಪಡೆಯೊಂದಿಗೆ ಹೆಚ್ಚು ವಿಸ್ತರಿಸಲ್ಪಟ್ಟಿತು. ಆದ್ದರಿಂದ ಈ ಸಮೂಹದ ಬೇರೆ ಬೇರೆ ಭಾಗಗಳು ಚರಿತ್ರೆಯ ಬೇರೆ ಬೇರೆ ಕಾಲಾವಧಿಗಳಿಗೆ ಸೇರುತ್ತವೆ. ಈ ದೇವಾಲಯದಲ್ಲಿ ಗರ್ಭಗೃಹ, ಸುಕನಾಸಿ, ನವರಂಗ ಮತ್ತು ಮುಖಮಂಟಪಗಳಿವೆ. ಪ್ರಧಾನ ದೇವಾಲಯದ ಸುತ್ತಲೂ ಕಂಬದಿಂದ ಕೂಡಿದ ಸುತ್ತು ಮಂಟಪ, ಭುವನೇಶ್ವರಿ ಮುಂತಾದ ಸಣ್ಣ ಸಣ್ಣ ದೇವಾಲಯಗಳೂ ಕಂಬಸಾಲುಗಳಿರುವ ತೆರೆದ ಮಂಟಪ, ಮಹಾದ್ವಾರ–ಗೋಪುರಗಳಿರುವ ಪ್ರಾಕಾರಗಳೂ ಇವೆ. ಉತ್ತರದಕಡೆ ಕನಗಿರಿ ಗೋಪುರದಿಂದ ಹೊರಗೆ ಮನ್ಮಥ ಕುಂಡದ ದಡದಲ್ಲಿ ಕೆಲವು ಗುಡಿಗಳಿವೆ. ಇವು ಮೊದಲಿಗೆ ಈ ಮುಖ್ಯ ದೇವಾಲಯ ಸಮೂಹಕ್ಕೇ ಸೇರಿದುವು.

ಈ ಲೇಖನದಲ್ಲಿ, ಈ ಸಮೂಹದ ವಿವಿಧ ಭಾಗಗಳನ್ನು ರಚಿಸಿರಬಹುದಾದ ಕಾಲವನ್ನು ನಿರ್ಣಯಿಸುವ

ಯತ್ನವನ್ನು ಮಾಡಲಾಗಿದೆ. ವಿರೂಪಾಕ್ಷ ದೇವಾಲಯ ಸಮೂಹದ ವಾಸ್ತುಶಿಲ್ಪ ಲಕ್ಷಣಗಳನ್ನು ಗಮನಿಸಿದರೆ, ಮೇಲಿಂದ ಮೇಲೆ ಜೀರ್ಣೋದ್ಧಾರವಾಗಿರುವುದನ್ನೂ ಹೊಸದಾಗಿ ಸೇರಿಸಲ್ಪಡುವ ಭಾಗಗಳಿಗೆ ಸ್ಥಳಾವಕಾಶವಾಗಲಿಲ್ಲವೆಂದು ಮೂಲರಚನೆಯನ್ನು ಕೆಲವೊಮ್ಮೆ ನಾಶಮಾಡಿರುವುದನ್ನೂ ಕಾಣಬಹುದಾಗಿದೆ. ಈ ಸಮೂಹದ ರಚನೆಯಲ್ಲಿ ಕನಿಷ್ಠ ಮೂರು ಹಂತಗಳನ್ನಾದರೂ ಸ್ಪಷ್ಟವಾಗಿ ಗುರುತಿಸಬಹುದಾಗಿದೆ.

೧. ಮೊದಲಿಗೆ, ಚಿಕ್ಕದಾಗಿ ರಚಿಸಲ್ಪಟ್ಟಿದ್ದ ಪ್ರಧಾನ ದೇವಾಲಯ ಮತ್ತು ಮನ್ಮಥಕುಂಡದ ದಡದಲ್ಲಿರುವ ಕೆಂಪುಮರಳುಗಲ್ಲಿನ ಎರಡು ದೇವಾಲಯಗಳು ಇದ್ದವು. ಈ ಮೂರು ರಚನೆಗಳೂ ೭ನೇ ಶತಮಾನದ ಕೊನೆಯಲ್ಲಿ ಇದ್ದವೆಂದು ಸ್ಪಷ್ಟವಾಗಿ ಹೇಳಬಹುದು. ಚಾಲುಕ್ಯ ದೊರೆ ವಿನಯಾದಿತ್ಯನು ಪಂಪಾತೀರ್ಥಕ್ಕೆ ಭೇಟಿಕೊಟ್ಟಿದ್ದನೆಂಬುದನ್ನು ಇಲ್ಲಿ ನೆನೆಯಬಹುದು. ಇದರಿಂದ 'ಪಂಪಾಪತಿ ದೇವಾಲಯ'ವೆಂದು ಸ್ಥಳೀಯವಾಗಿ ಕರೆಯಲ್ಪಟ್ಟಿರುವ ವಿರೂಪಾಕ್ಷ ದೇವಾಲಯವು ಆ ಕಾಲಕ್ಕೆ ಅಸ್ತಿತ್ವದಲ್ಲಿತ್ತೆಂದು ಊಹಿಸಬಹುದಾಗಿದೆ.

೨. ಮನ್ಮಥಕುಂಡದ ತೀರದಲ್ಲಿರುವ ಕೆಂಪುಮರಳುಗಲ್ಲಿನ ದೇವಾಲಯಗಳ ಅಕ್ಕಪಕ್ಕಗಳಲ್ಲಿ ರಚಿಸಲ್ಪಟ್ಟಿರುವ ಚಿಕ್ಕ ಚಿಕ್ಕ ಗುಡಿಗಳ ಸಾಲು ಎರಡನೇ ಹಂತಕ್ಕೆ ಸೇರುತ್ತದೆ. ಕಲ್ಯಾಣಿ ಚಾಲುಕ್ಯರ ಕಾಲದ ಲಕ್ಷಣಗಳನ್ನು ಸ್ಪಷ್ಟವಾಗಿ ಹೊಂದಿರುವ ಈ ದೇವಾಲಯಗಳನ್ನು ೧೨, ೧೩ ಮತ್ತು ೧೪ನೇ ಶತಮಾನಗಳ ಆರಂಭದಲ್ಲಿ ಕಟ್ಟಲಾಗಿದೆ. ೧೩ ಮತ್ತು ೧೪ನೇ ಶತಮಾನಗಳಲ್ಲಿ ವಿರೂಪಾಕ್ಷ ದೇವಾಲಯವು ಹಂಪೆಯ ಜನಜೀವನದ ಎಲ್ಲ ಚಟುವಟಿಕೆಗಳ ಕೇಂದ್ರವಾಯಿತು. ಇಲ್ಲಿಯೇ ಒಂದು ಮಾತನ್ನು ಹೇಳುವುದು ಅಪ್ರಸ್ತುತವಾಗಲಾರದು. ಏನೆಂದರೆ, ಮೂರನೇ ಬಲ್ಲಾಳನು ವಿರೂಪಾಕ್ಷ ಬಲ್ಲಾಳನಿಗೆ ಯುವರಾಜ ಪಟ್ಟಾಭಿಷೇಕವನ್ನು ಮಾಡಿದ್ದು ಹಂಪೆಯಲ್ಲೇ. ಈ ಪಟ್ಟಾಭಿಷೇಕ ಮಹೋತ್ಸವವು ವಿರೂಪಾಕ್ಷ ದೇವಾಲಯದಲ್ಲಿ ನಡೆದಿರುವ ಸಾಧ್ಯತೆ ಇದೆ.

೩. ಮೂರನೇ ಹಂತದಲ್ಲಿ ಪ್ರಧಾನ ದೇವಾಲಯದ ಪುನರ್ರಚನೆ, ಸುತ್ತುಮಂಟಪ, ತೆರೆದ ಕಂಬಸಾಲು ಮಂಟಪಗಳು, ಗೋಪುರ ಮತ್ತಿತರ ವಾಸ್ತುಭಾಗಗಳ ರಚನೆಯಾಗಿದೆ. ಈಗಿರುವ ಗರ್ಭಗೃಹ, ಸುಕನಾಸಿ ಮತ್ತು ನವರಂಗಗಳನ್ನು ಸಂಗಮ ವಂಶಜರ ಆರಂಭದ ಕಾಲದಲ್ಲಿ ಪುನರ್ರಚಿಸಲಾಗಿದೆ. ಹೊರಗೋಡೆಯಲ್ಲಿರುವ ಕುಡ್ಯಸ್ತಂಭ ಮತ್ತು ಕುಂಭಪಂಜರಗಳು ಇದನ್ನು ಸೂಚಿಸುತ್ತವೆ. ಕ್ರಿ.ಶ. ೧೫೧೦ರಲ್ಲಿ ಕೃಷ್ಣದೇವರಾಯನು ತನ್ನ ಪಟ್ಟಾಭಿಷೇಕದ ನೆನಪಿಗಾಗಿ ಈ ದೇವಾಲಯದ ಮುಖಮಂಟಪವನ್ನು (ಶಾಸನದಲ್ಲಿ ಇದನ್ನು 'ರಂಗಮಂಟಪ' ಎನ್ನಲಾಗಿದೆ) ಕಟ್ಟಿಸಿದನು. ಅಲ್ಲದೆ, ಸಂಗಮರಿಂದ ರಚಿಸಲ್ಪಟ್ಟ ಗೋಪುರವನ್ನು ಜೀರ್ಣೋದ್ಧಾರ ಮಾಡಿದನು. ಇದೇ ಕಾಲದಲ್ಲಿ ವಿಶಾಲ ಪ್ರಾಕಾರದೊಳಗಿದ್ದ ರಂಗಮಂಟಪದ ಮುಂಭಾಗದಲ್ಲಿ ಚಿಕ್ಕ ಗೋಪುರವನ್ನೂ ಕಟ್ಟಿಸಿದನು. ಇದನ್ನು ಕೆಲವೊಮ್ಮೆ 'ರಾಯಗೋಪುರ'ವೆಂದು ಕರೆಯುವುದುಂಟು. ಪ್ರಧಾನ ಗೋಪುರವನ್ನು ಎರಡನೇ ದೇವರಾಯನ ಅಧಿಕಾರಿಯಾದ ಪೋಲುಗಂಟಿ ತಿಪ್ಪನು ಕಟ್ಟಿಸಿದನು. ರಂಗಮಂಟಪದ ಒಳಛಾವಣಿಯ ಕೆಳಗೆ ನಾಲ್ಕೂ ದಿಕ್ಕಿನಲ್ಲಿರುವ ಗಾರೆಯ ವಿಗ್ರಹಗಳು ಕೃಷ್ಣದೇವರಾಯನ ನಂತರದ ಕಾಲಕ್ಕೆ ಸೇರುತ್ತವೆ. ಅನಂತಶಯನ, ಶಿವಪಾರ್ವತಿಯರ ಕಲ್ಯಾಣ, ವಿಷ್ಣುವಿನ ದಶಾವತಾರ ಮುಂತಾದ ಗಾರೆಯ ಕೃತಿಗಳು ಒಳಛಾವಣಿಯ ಕೆಳಗಿರುವ ಮೂಲ ಶಿಲಾಮೂರ್ತಿಗಳ ಮೇಲೆ ಮಾಡಿದ ಗಾರೆಯ ಲೇಪನವಾಗಿದೆ. ಇವುಗಳನ್ನು ಅಚ್ಯುತರಾಯನು ಸುತ್ತುಮಂಟಪವನ್ನು ಕಟ್ಟಿಸಿದ ಕಾಲದಲ್ಲೇ ಮಾಡಿಸಿರಬೇಕು. ರಂಗಮಂಟಪದ ಕೈಪಿಡಿಯಲ್ಲಿರುವ ಗಾರೆಯ ಆಕೃತಿಗಳು ಕೂಡಾ ಇದೇ ಕಾಲದವು.

ಪ್ರಧಾನ ದೇವಾಲಯವು ಪ್ರಾಕಾರಭಿತ್ತಿ ಮತ್ತು ಸುತ್ತುಮಂಟಪದಿಂದ ಸುತ್ತುವರಿಯಲ್ಪಟ್ಟಿದೆ. ಈ ಸುತ್ತುಮಂಟಪವು ಬಹುಶಃ ಅಚ್ಯುತರಾಯನ ಕಾಲದಲ್ಲಿ ಕಟ್ಟಲ್ಪಟ್ಟಿದೆ. ಎಡಗಡೆಗೆ ಇರುವ ಸುತ್ತುಮಂಟಪವು ನಂತರದ ಸೇರ್ಪಡೆಯಾಗಿದೆ. ಎಡಭಾಗದ ಪ್ರವೇಶದಲ್ಲಿರುವ ಗೋಪುರದಲ್ಲಿಯ ಕುಡ್ಯಸ್ತಂಭ ಮತ್ತು ಕುಂಭಗಳು ಪ್ರಧಾನ ದೇವಾಲಯದ ಹೊರಭಿತ್ತಿಯಲ್ಲಿಯ ಕುಡ್ಯಸ್ತಂಭ ಮತ್ತು ಕುಂಭಗಳನ್ನು ಹೋಲುತ್ತಿರುವುದು ಈ ಅಂಶವನ್ನು ಸ್ಪಷ್ಟಪಡಿಸುತ್ತದೆ. ಸುತ್ತುಮಂಟಪವು ಪ್ರವೇಶದ್ವಾರದಲ್ಲಿ ಸ್ವಲ್ಪಭಾಗವನ್ನು ಆವರಿಸಿದೆ.

ಈ ಸುತ್ತುಮಂಟಪವನ್ನು ಕಟ್ಟುವ ಸಮಯದಲ್ಲೇ ಭುವನೇಶ್ವರಿ ಮತ್ತು ಪಂಪಾದೇವಿ ದೇವಾಲಯಗಳನ್ನು ಪುನಃ ಕಟ್ಟಿರಬೇಕು. ಆಗ ಆ ದೇವಾಲಯಗಳು ಹಾಳಾಗಿದ್ದುವೆಂದೋ ಯಾವುದೋ ಕಾರಣಕ್ಕಾಗಿ ಪೂಜೆಯು ನಿಂತುಹೋಗಿದ್ದಿತೆಂದೋ ಅಚ್ಯುತರಾಯನ ಕಾಲದಲ್ಲಿ ಸುತ್ತಮಂಟಪದೊಳಗೆ ಈ ದೇವಾಲಯಗಳನ್ನು ಪುನರ್ರಚಿಸಿರಬೇಕು. ವಾಸ್ತವವಾಗಿ, ಈ ಎರಡೂ ದೇವಾಲಯಗಳ ಅಂಗಗಳಾದ ದ್ವಾರಬಂಧ, ಒಳಭಾವಣಿ ಮತ್ತು ಸ್ತಂಭಗಳು ಹನ್ನೆರಡನೇ ಶತಮಾನದ ಕಲ್ಯಾಣಿ ಚಾಲುಕ್ಯರ ನಿರ್ಮಾಣಗಳು.

ಭುವನೇಶ್ವರಿ ದೇವಾಲಯದ ಬಗ್ಗೆ ಹೇಳುವುದಾದಲ್ಲಿ, ಕುಡ್ಯಸ್ತಂಭಗಳನ್ನೇ ಭಾವಣಿಗೆ ತೊಲೆಗಳಂತೆ ಬಳಸಲಾಗಿದೆ. ಮೂಲ ದೇವಾಲಯದ ರಚನೆ ಮತ್ತು ಲಕ್ಷಣಗಳಿಗೆ ಹೆಚ್ಚು ಬದಲಾವಣೆಯನ್ನು ತಾರದೆ ಮಾಡಿದ ಜೀರ್ಣೋದ್ಧಾರವೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಈಗ ಸುತ್ತು ಆವರಣದಲ್ಲಿ ಎರಡು ದೇವಾಲಯಗಳು ಇರುವುವಾದರೂ ಮೂಲತಃ ಕೆಳಮಟ್ಟದಲ್ಲಿ ಒಂದೇ ಒಂದು ದೇವಾಲಯವಿದ್ದಿತು. ಈ ದೇವಾಲಯವು ಮನ್ಮಥಕುಂಡದ ದಡದ ಮೇಲಿರುವ ಕಲ್ಯಾಣಿ ಚಾಲುಕ್ಯರ ದೇವಾಲಯಗಳ ಸಮಮಟ್ಟದಲ್ಲಿದ್ದಿತು. ಹನ್ನೆರಡನೇ ಶತಮಾನದ ಶಾಸನದಲ್ಲಿ ಮೂಲ ದೇವಾಲಯವನ್ನು ಪಂಪಾದೇವಿ ದೇವಾಲಯವೆಂದು ಹೇಳಲಾಗಿದೆ. ಈಗ ಇದು ಕಲ್ಯಾಣಿ ಚಾಲುಕ್ಯರ ದೇವಾಲಯಗಳ ಗುಂಪಿನಲ್ಲೊಂದಾಗಿದೆ. ಒಳಪ್ರಾಕಾರದಲ್ಲಿ ವಿರೂಪಾಕ್ಷ ದೇವಾಲಯದ ಎದುರಿಗಿರುವ ನಾಲ್ಕು ಕಂಬಗಳ ಮಂಟಪದಲ್ಲಿಯ ಗಂಟೆಯಾಕಾರದ ಎರಡು ಕಂಬಗಳು ಮೇಲೆ ಹೇಳಿದ ಪಂಪಾದೇವಿ ದೇವಾಲಯಕ್ಕೆ ಸೇರಿದುವಾಗಿದ್ದುವು. ಈ ಮಂಟಪವು ತುಳುವರ ನಿರ್ಮಾಣವಾಗಿದೆ.

೪. ವರ್ಣಚಿತ್ರ ಕಲೆ : ರಂಗಮಂಟಪದಲ್ಲಿಯ ವರ್ಣಚಿತ್ರವನ್ನು, ವಿದ್ವಾಂಸರಾದ ಸಿ. ಶಿವರಾಮಮೂರ್ತಿ, ಆರ್. ಎನ್. ಸಾಲೆತೊರೆ, ಸಿ. ಟಿ. ಎಂ. ಕೊಟ್ರಯ್ಯ ಮುಂತಾದವರು ವಿಜಯನಗರದ ಪ್ರಾರಂಭಿಕ ಹಂತದ ವರ್ಣಚಿತ್ರವೆಂದೂ ತುಳುವರ ಕಾಲದ್ದಲ್ಲವೆಂದೂ ಅಭಿಪ್ರಾಯಪಡುತ್ತಾರೆ. ಆದರೆ ಶೈಲಿ, ಸಂಯೋಜನೆ, ಅಲಂಕಾರ ವಿವರಣೆ, ಆಶಯಗಳಲ್ಲಿ ಹಂಪೆ ಮತ್ತು ಲೇಪಾಕ್ಷಿಗಳ ವರ್ಣಚಿತ್ರ ಫಲಕಗಳಲ್ಲಿ ಬಹಳ ವ್ಯತ್ಯಾಸಗಳಿವೆ. ಲೇಪಾಕ್ಷಿಯಲ್ಲಿಲ್ಲದ ಮತ್ತು ಹಂಪೆಯಲ್ಲಿರುವ ಅನೇಕ ವರ್ಣಚಿತ್ರಕಲೆಯ ಲಕ್ಷಣಗಳು ಹದಿನೇಳನೇ ಶತಮಾನ ಮತ್ತು ನಂತರದಲ್ಲೂ ಮುಂದುವರಿದಿವೆ. ಇದರಿಂದ ಈ ವರ್ಣಚಿತ್ರವು ಕ್ರಿ.ಶ. ೧೫೬೫ರ ನಂತರ ಬಹುಶಃ ಅರವೀಡು ಮನೆತನದ ಆಶ್ರಯದಲ್ಲಿ ಅಂದರೆ, ೧೭ನೇ ಶತಮಾನದಲ್ಲಿ ಚಿತ್ರಿತವಾಗಿರುವುದು ದೃಢಪಡುತ್ತದೆ.

(ಕನ್ನಡಾನುವಾದ/ಕೂ. ಸ. ಅಪರ್ಣ)